

# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## **ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 22-03-2021 ಪ್ರಶ್ನೆ ಸಂಖ್ಯೆ : 1552 (1721)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 22-03-2021

ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಮತ್ತು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

ವಿಷಯ : ಮುಂಬಡ್ತಿ ಸಭೆ ನಡವಳಿಯಲ್ಲಿನ ಮುಚ್ಚಿಟ್ಟ ಲಕೋಟೆಯನ್ನು ತೆರೆದು ಕ್ರಮ ವಹಿಸುವ ಬಗ್ಗೆ

(ಅ) ತಾಂತ್ರಿಕ ಶಿಕ್ಷಣ ಇಲಾಖೆಯಲ್ಲಿರುವ ಸರ್ಕಾರಿ ಜವಳಿ ಸಂಸ್ಥೆ (ಪಾಲಿಟೆಕ್ನಿಕ್), ಬೆಂಗಳೂರು, ಈ ಸಂಸ್ಥೆಯ ಪ್ರಾಂಶುಪಾಲರ ಹುದ್ದೆಗೆ ಮುಂಬಡ್ತಿ ನೀಡಲು 2004ರಲ್ಲಿ ಇಲಾಖಾ ಮುಂಬಡ್ತಿ ಸಮಿತಿ ಸಭೆಯನ್ನು ನಡೆಸಲಾಗಿದ್ದು, ಡಿಪಿಸಿ ನಡವಳಿಯಲ್ಲಿ ಪ್ರಾಂಶುಪಾಲರ ಹುದ್ದೆಗೆ ಅರ್ಹರಾದ ಅಭ್ಯರ್ಥಿಯ ಹೆಸರನ್ನು ಮುಚ್ಚಿಟ್ಟು ಲಕೋಟೆಯಲ್ಲಿ ಇಡಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಮಾನ್ಯ ನ್ಯಾಯಾಲಯದ ಆದೇಶವನ್ನು ಅನುಷ್ಠಾನ ಮಾಡಲು ಮುಚ್ಚಿಟ್ಟು ಲಕೋಟೆ ತೆರೆಯಲು ತೆಗೆದುಕೊಂಡ ಕ್ರಮದ ಬಗ್ಗೆ ಸರ್ಕಾರದ ಕ್ರಮವೇನು; (ಸಂಪೂರ್ಣ ವಿವರ ನೀಡುವುದು)

(ಇ) ಅನರ್ಹ ಅಭ್ಯರ್ಥಿಯು ಉನ್ನತ ಹುದ್ದೆಯನ್ನು ಅಲಂಕರಿಸಿದ್ದು, ಅರ್ಹ ಅಭ್ಯರ್ಥಿಯು ಸರ್ಕಾರಕ್ಕೆ ಮನವಿ ಸಲ್ಲಿಸಿದಾಗ್ಯೂ, ಯಾವುದೇ ಸೌಲಭ್ಯ ದೊರೆಯದೆ ಆರ್ಥಿಕ ನಷ್ಟ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? (ವಿವರ ನೀಡುವುದು)